KARNATAKA

# Kabya Kalanidhi Series,

No. 1.

# PAMPA SATAKAM,

BY

HARI HARA DEVA.

ಮ ಹಾ ಕ ವಿ

ಹರಿಹರದೇವ ವಿರಚಿತಂ

# ಪಂಪಾ ಶತಕಂ.

---

EDITED & PUBLISHED

BY

**S. G. Narasimhachar**

Librarian, Government Oriental Library, Mysore;

AND

**M. A. Ramanuja Iyengar**

sst. Master, Wesleyan High School Mysore.

---

MYSORE:

PRINTED AT THE STAR PRESS.

1899.

# ಕವಿಚರಿತೆ.

——:o:——

"ಈ ಗ್ರಂಥಕರ್ತನಿಗೆ ಹರಿಹರದೇವ ಅಥವಾ ಹರೀಶ್ವರದೇವನೆಂದು ಹೆಸರು. ಈತನು ಸುಮಾರು ಶಕ 1165 ರಲ್ಲಿ- ಎಂದರೆ ಕ್ರಿಸ್ತಶಕ. 1283 ರಲ್ಲಿ- ಇದ್ದಂತೆ ತಿಳಿಯುತ್ತದೆ.

"ಈತನು ಗಿರಿಜಾಕಲ್ಯಾಣ, ಶಿವಗಣದರಗಳೆಗಳು, ಪಂಪಾಶತಕ, ಎಂಬ ಗ್ರಂಥಗಳನ್ನು ಬರೆದಿದ್ದಾನೆ. ಅಲ್ಲದೆ ರಕ್ಷಾಶತಕ, ಶಿವಾಕ್ಷಮಾಲೆ, ಮುಡಿಗೆಯ ಅಷ್ಟಕ, ಎಂಬ ಗ್ರಂಥಗಳನ್ನೂ ರಚಿಸಿರುವಂತೆ ತಿಳಿಯಬರುತ್ತದೆ. ಈಗ ಅಚ್ಚಾಗಿರುವ ಭಾಮಿನೀಷಟ್ಪದಿರೂಪವಾದ ವಿರೂಪಾಕ್ಷಶತಕವೆಂಬ ಗ್ರಂಥವೂ ಇವನ ಕೃತವೆಂದು ಕೆಲವರು ಹೇಳುತ್ತಾರೆ. ಹಾಗೆ ಹೇಳುವುದಕ್ಕೆ ಆವ ಆಧಾರವೂ ಇಲ್ಲ. ಈ ಗ್ರಂಥದಲ್ಲಿ 'ದೇವರಾಯನಿಗೆ ವರವಿತ್ತು ಸಲಹುವುದು' ಎಂದಿರುವುದರಿಂದ ಇದು ಕ್ರಿ. ಶ. ೧೪ನೆಯ ಶತಮಾನದಲ್ಲಿದ್ದ ದೇವರಾಯನ ಕಾಲದವನಾದ ಆವನೊಬ್ಬ ಕವಿಯಿಂದ ವಿರಚಿತವಾಗಿರಬೇಕು.

"ಹರಿಹರನು ನರಸಿಂಹಬಲ್ಲಾಳನ ಆಳಿಕೆಯಲ್ಲಿ ಹಳೆಯಬೀಡಿನಲ್ಲಿ 'ಕರಣಿಕರ ಕುಲತಿಲಕ' ನಾಗಿ ಇದ್ದನು. ಈತನ ಗುರು ಹಂಪೆಯ ಮಾಯಿದೇವನು; ಈತನ ಸೋದರಳಿಯ ರಾಘವಾಂಕನು. ಈತನ ಕಾಲದಲ್ಲಿ ಕೆರೆಯ ಪದ್ಮರಸನು ನರಸಿಂಹಬಲ್ಲಾಳನಲ್ಲಿ ಮಂತ್ರಿಯಾಗಿದ್ದನು. ಈ ದೊರೆಯ ಮಗನಾದ ಬಿಟ್ಟಿಬಲ್ಲಾಳನು ಯುವರಾಜನಾಗಿದ್ದನು. ನರಸಿಂಹಬಲ್ಲಾಳನು ಹರೀಶ್ವರನನ್ನು ಲೆಕ್ಕವನ್ನು ಕೇಳಿದಾಗ ಈತನು ಕಡಿತವನ್ನು ಬಿಸುಟ್ಟು ಕೈಗಳನ್ನು ಬಡಿದಂತೆಯೂ, ದೊರೆ ಅದೇನೆಂದು ಕೇಳಲಾಗಿ- ಪಂಪಾವಿರೂಪಾಕ್ಷನಾಲಯದಲ್ಲಿ ಆರತಿಯನ್ನು ಎತ್ತಿದಾಗ ಅದರ ಸೆಕೆ ಹತ್ತಿ ಮೇಲ್ಕಟ್ಟಿನ ಬಟ್ಟೆ ಭುಗಿಲೆಂದು ಉರಿವುದನ್ನು ಕಂಡು ಕೈಯಿಂದ ಬಡಿದು ಆರಿಸಿದೆನು ಎಂದು ಹೇಳಿದಂತೆಯೂ, ದೊರೆ ಆ ಮಾತನ್ನು ನಂಬದೆ ವಿರೂಪಾಕ್ಷಾಲಯಕ್ಕೆ ಒಬ್ಬ ದೂತನನ್ನು ಕಳುಹಿ ಹರಿಹರನು ಹೇಳಿದುದು ನಿಜವೆಂದು ತಿಳಿದು ಆಶ್ಚರ್ಯಪಟ್ಟು ಈತನನ್ನು ವಿರೂಪಾಕ್ಷಾಲಯದಲ್ಲಿ ಬರೆದು ಕೊಂಡಿರುವೆಂದು ಕಳುಹಿದಂತೆಯೂ, ಪದ್ಮರಸನು ಕಾಶಿಗೆ ಹೋಗುವಾಗ ಹಂಪೆಗೆ ಬಂದು ಈತನನ್ನು ನೋಡಿ- 'ಉಮಾಪರಂ ನಿಮ್ಮ ನಿಂದಿಗೆಂಟನೆಯ ಬಳಿಕೆ ತನ್ನೊಳ್ ನೆರೆಪಿರ್ದಪಂ, ಅಂತರಿಂ ನೀವಿನಾಗಳೂರೆದ ಮಹಾಕಾವ್ಯದೊಳ್† ಅನಿತಜನೊಳ್ ಪುದಿದಿಪ್ಪುದು ಎಂದು ಹೇಳಿಹೋದಂತೆಯೂ, ತನ್ನ ಸೋದರನಳಿಯನಾದ ರಾಘವನು ಗತಿಸಿದ ಎಂಟುದಿನಕ್ಕೆ ಈತನು ಹಂಪೆ ವಿರೂಪಾಕ್ಷ

---

† ಈ ಮಹಾಕಾವ್ಯವು ಗಿರಿಜಾಕಲ್ಯಾಣವೇ ಆಗಿರಬಹುದು.

ಲಿಂಗದೊಳಡಗಿದಂತೆಯೂ, ಚೆನ್ನಬಸವಪುರಾಣ ಪದ್ಮರಾಜಪುರಾಣಗಳಿಂದ ತಿಳಿಯುಬರುತ್ತದೆ. ಭೈರವೇಶ್ವರಕಾವ್ಯದ ಕಥಾಸೂತ್ರರತ್ನಾಕರದಲ್ಲಿ ಈತನ ವಿಷಯುವಾಗಿ ಹೀಗೆ ಬರೆದಿದೆ:— ಪಂಪಾಕ್ಷೇತ್ರದಲ್ಲಿ ಬಪ್ಪುವ ಹಂಪೆಯುಶಂಕರಾಚಾರ್ಯರ ಮಗ ಮಾದರಸನು. ಅವನ ಮಗ ಹಂಪಯು ಹರೀಶ್ವರನು. ಈತನ ಗುರು ಮಾಯಿದೇವಾಚಾರ್ಯನು. ದೋರಸಮುದ್ರದ ಅರಸು ನೃಸಿಂಹಬಲ್ಲಾಳನು, ಪದ್ಮರಸರೆಂಬ ಆರಾಧ್ಯಪುಂಗವರ್ಗೆ ಪ್ರಧಾನಿಪಟ್ಟವಂ ಕಟ್ಟಿ ಹಂಪೆಯು ಹರೀಶ್ವರದೇವರ್ಗೆ ರಹಸ್ಯವ ಬರೆವ ಕರಣಿಕರಿಗೆಲ್ಲಾ ಹಿರಿಯುತನವಂ ಕೊಟ್ಟು ಮಡಗಿಕೊಂಡಿರಲಾ ಹರಿಯಣ್ಣಪಂಡಿತನು ವಿಷ್ಣುವೊದಲಾದ ಅನದೈವಕ್ಕೆ ಪೊಡೆಮಡಲೊಲ್ಲೆನು; ಗುಡಿಯು ಹೊಗಲೊಲ್ಲೆನು ಎಂದು ನೇಮವಂ ಮಾಡಿಕೊಂಡಿದ್ದನು. ಹರಿಹರೇಶ್ವರನ ಗುಡಿಯುಲ್ಲಿ ಬ್ರಹ್ಮರಾಕ್ಷಸನನ್ನು ಓಡಿಸಿದನು. 'ಸರಸಮೃದುಮಧುರೋಪಮೆಗಳಿಂದ ವಸ್ತುಕವರ್ಣಕದಿಂದ ಶಿವನಂ ಶಿವಗಣಂಗಳಂ ರಗಳೆಗಳಿಂದ ನುತಿಸಿ ವಚನದ ರಚನೆ ಹೆಚ್ಚುವಂತೆ ಗಿರಿಜೆಯು ಕಲ್ಯಾಣವಂ ರಚಿಸಿದನು.' 'ಶತಕಾಷ್ಟಕಾಕ್ಷರಮಾಲಾಗದ್ಯವೊದಲಾದುವರಿಂದ ಶಿವನಂ ನುತಿಸಿದನು.'

"ಈ ಕವಿಗೆ ಹರಿದೇವ, ಹರಿಹರ, ಹರಿಗ, ಹರಿ, ಹರಿಯಣ್ಣಪಂಡಿತ, ಹಂಪೆಯು ಹರೀಶ್ವರ, ಎಂಬ ಹೆಸರುಗಳುಂಟು. 'ಪರಮಾನಂದಾಬ್ಧಿಪಂಪಾಪುರದರಸವಿರೂಪಾಕ್ಷಸಾಕ್ಷಾತ್ಸುಪುತ್ರಂ' ಎಂದು ಹೇಳಿಕೊಂಡಿದ್ದಾನೆ. ಹಂಪೆಯು ವಿರೂಪಾಕ್ಷನನ್ನೇ ತನ್ನ ಗ್ರಂಥಗಳಲ್ಲಿ ವಿಶೇಷವಾಗಿ ಕೊಂಡಾಡಿದ್ದಾನೆ.

"ಈತನನ್ನು ಪ್ರಾಯಶಃ ಎಲ್ಲಾ ವೀರಶೈವಕವಿಗಳೂ ಸ್ತುತಿಸಿದ್ದಾರೆ. ವೀರಶೈವ ಕವಿಗಳಲ್ಲಿ ಈತನೇ ಪ್ರಬಲನಾದ ಪೂರ್ವಕವಿಯೆನ್ನಬಹುದು.

ಈತನನ್ನು ಭೀಮಕವಿ (ಸು. ಶ. 1369) ತನ್ನ ಬಸವಪುರಾಣದಲ್ಲಿ

ಸರಸಮೃದುಮಧುರೋಪಮೆಗಳಂ |
ಕುರಿಸೆ ವಸ್ತುಕವರ್ಣಕಂಗಳ |
ನೆರಪಿ ಹರನಂ ಹರಗಣಂಗಳನೈದೆ ಕೀರ್ತಿಸಿದ ||
ಧರೆಗುಭಯುಕವಿ ಶರಭಭೇರುಂ |
ಡರಸು ಕವಿ ಹರಿಬುಧವರನು ...... || ಎಂದೂ

ಪದ್ಮಣಾಂಕನು (ಸು. ಶ. 1385) ತನ್ನಪದ್ಮರಾಜಪುರಾಣದಲ್ಲಿ—

ಚಮುರಿಂಪು ಸೊಂಪಲಂಕೃತಿ ಚಮತ್ಕೃತಿ ರೀತಿ |
ಮೃದುಮಧುರಸರಸೋಪಮಾದ್ಯಖಿಳಲಕ್ಷಣಾ |
ಭ್ಯುದಿತವಸ್ತುಕವರ್ಣಕಂಗಳಿಂ ಶಿವನಂ ಶಿವೈಕ್ಯರಂ ನುತಿಸುತಿರ್ದ ||
......... ಶಿವಕವೀಂದ್ರಂ || ಎಂದೂ,

ನೀಲಕಂಠನು (ಸು. ಶ. 15 ನೆಯ ಶತಮಾನ) ತನ್ನ ಆರಾಧ್ಯಚಾರಿತ್ರದಲ್ಲಿ

ಕಂಪವುದಗ್ಗ ಚಂದನದ ಪಂಕದೊಳ್ ಪರಿಮಳಂ |
ಪೆಂಪುವಡೆದಂತೆ ರಸಭರಿತಪ್ರಬಂಧದೊಳ್ |
ಸೊಂಪುದೋಱುವ ಶಬ್ದಸಂದರ್ಭವೊಪ್ಪುತಿರೆ ಪೊಸತಪ್ಪ ಯುಕ್ತಿಯಿಂದಂ ||
ಇಂಪಾಗಿ ಶಿವಗಣಪ್ರಕರಮಂ ಕೊಂಡಾಡಿ |
ಪಂಪೆಯೊಳು ಪಂಪಾವಿರೂಪಾಕ್ಷನೊಳಗವಿದ ||
ಪಂಪೆಯುಹರೀಶ್ವರಂ ......... ||

ಎಂದೂ, ಸ್ತುತಿಸಿದ್ದಾರೆ. ಹೀಗೆಯೇ ಇನ್ನೂ ಅನೇಕ ವೀರಶೈವಕವಿಗಳೂ ಸ್ತುತಿಸಿದ್ದಾರೆ.

---

ಈ ಕವಿಚರಿತ್ರೆಯು "ಕರ್ಣಾಟಕಕವಿಚರಿತೆ" ಯಿಂದ ಉದ್ಧರಿಸಿದೆ. ಇದನ್ನು ಅನುವಾದ ಮಾಡಿಕೊಳ್ಳುವದಕ್ಕೆ ಅನುಮತಿಯನ್ನು ಕೊಟ್ಟುದಕ್ಕಾಗಿ ಆ ಗ್ರಂಥಕರ್ತರಿಗೆ ಬಹಳ ಕೃತಜ್ಞರಾಗಿರುತ್ತೇವೆ.

# ಹರಿಹರದೇವ ವಿರಚಿತಂ
# ಪಂಪಾಶತಕಂ.

---

ಶ್ರೀಸಂಪದ್ರಾಜಕಳಾವತಂಸಸೋಮಚಂದ್ರಾರ್ಕಾಗ್ನಿಜೀವಾನಿಲ ।
ವ್ಯೋಮಾದಿಪ್ರಕರಂಗಳಂ ಸಕಲಮಂ ರಕ್ಷಿಪ್ಪ ಸರ್ವೇಶ್ವರಂ ॥

... ... ... ...
... ... ... ...

... ... ... ...
... ... ... ...
... ... ... ...
... ... ... ...

... ... ... ...
... ... ... ...
... .. ... ...
... ... ... ...

... ... ... ...
... ... ... ...
... ... .. ...
... ... ... ...

ಕರೆಪ್ರವದೆಂದು ಕಾಲ್ವಿಡಿಸಿ ಕೊಳ್ವುದದೆಂದು ದಯಾಕಟಾಕ್ಷದಿಂ ।
ಪೊರೆಪ್ರವದೆಂದು ಪೊಲ್ಲ್ನಡಿಗಳಂ ಮದವೋಚಿಪ್ರುದೆಂದು ಸೋಂಕಿಸಿಂ ॥
ಪರಿಪ್ರವದೆಂದು ಸಂತಸದೆ ಪೆರ್ಚಿಪ್ರುದೆಂದು ಮನಸ್ಸಿನಿಂ ಕರಂ ।
ಕರಗಿಪ್ರದೆನ್ನನೆಂದೊಸೆದು ಪೇಳೆನಗಿಂದೆಲೆ ಪಂಪೆಯಾಳ್ದನೇ॥ ೫

ತೆರೆಮಸಗಲ್ ಸುಖಾಶ್ರುವಿದಿರೇಱುತಿರಲ್ ಪುಳಕಂ ಜಿಮುರ್ ಕರಂ ।
ಪರಿಯಿಸೆ ಗದ್ಗದಂ ಸುಳಿಗೊಳುತ್ತಿರೆ ಕಂಪನಮುಕ್ಕಿ ಲೀಲೆಯೊ ॥
ತ್ತರಿಸುತಿರಲ್ ಮದೀಶ ನಿಜಭಕ್ತಿತರಂಗಿಣಿ ಮೀಱುತುಬ್ಬರಂ ।
ಬರಿವುತುಮೆನ್ನ ಮೇಲೆ ಮಡುಗಟ್ಟುವುದೆಂದೆಲೆ ಪಂಪೆಯಾಳ್ದನೇ ॥ ೬

ನಡೆತಂದೆನ್ನಯ ಕಣ್ಗಳಲ್ಲಿರು ವಿರೂಪಾಕ್ಷಾ ವಿರೂಪಾಕ್ಷ ನೀಂ ।
ಬಿಡದಂತೆನ್ನಯ ಜಿಹ್ವೆಯಲ್ಲಿರು ವಿರೂಪಾಕ್ಷಾ ವಿರೂಪಾಕ್ಷ ನೀ ॥
ನೆಡೆಗೊಂಡೆನ್ನಯ ಚಿತ್ತದಲ್ಲಿರು ವಿರೂಪಾಕ್ಷಾ ವಿರೂಪಾಕ್ಷ ನೀ ।
ನಿಡಿವಂತೆನ್ನೊಳೆ ಕೂಡಿ ನಿಲ್ಲೆಲೆ ವಿರೂಪಾಕ್ಷಾ ವಿರೂಪಾಕ್ಷನೇ ॥ ೭

ನೋಡದ ಕಣ್ಗಳೇಕೆ ಸಲೆ ಕೇಳದ ಕರ್ಣಮದೇಕೆ ಭಕ್ತಿಯಿಂ ।
ಪಾಡದ ಬಾಯದೇಕೆ ಪೆಸ*ರ್ಗೊಳ್ಳದ ಜಿಹ್ವೆಯದೇಕೆ ಪೂಜೆಯಂ ॥
ಮಾಡದ ಕೈಗಳೇಕೆ ನೆಱೆ ಸೋಂಕದ ದೇಹಮದೇಕೆ ಕೂಡಿಯು ।
ಱ್ಕಾಡದ ಚಿತ್ತವೇಕೆನಗೆ ಪಂಪೆಯ ಲಿಂಗವೆ ನಿನ್ನೊಳಚ್ಚಿಱಿಂ ॥ ೮

ಎಂದುಂ ನಿನ್ನೊಳೆಲೇ ಮಹೇಶ್ವರ ಮನಂ ಬಂದಂತೆ ಚಿಂತಿಪ್ಪ ಕಣ್ ।
ಬಂದಂತೀಕ್ಷಿಪ ಜಿಹ್ವೆ ಬಂದ ತೆಱದಿಂ ಬಣ್ಣಿಪ್ಪ ಮೆಯ್ಯುಬ್ಬುರ್ಬುತುಂ ॥
ಬಂದಂತಾಂ ಪುಳಕಿಪ್ಪ ಕೈಗಳಿನಸುಂ ಬಂದಂತೆ ಪೂಜಿಪ್ಪ ಕಾಲ್ ।
ಬಂದಂತಾಡುವ ಸೈಪು ಸಾರ್ಪುದೆನಗಿನ್ನೆಂದೋ ವಿರೂಪಾಕ್ಷನೇ ॥ ೯

ಇದು ಚಿತ್ರಂ ಪರಮಂತ್ರಸಂತತಿ ವಿರೂಪಾಕ್ಷಾವಿರೂಪಾಕ್ಷನೆಂ ।
ಬುದೆ ಮಾತಕ್ಕಟ! ತನ್ನ ಜೀವಮೆ ವಿರೂಪಾಕ್ಷಾ ವಿರೂಪಾಕ್ಷ ನಾ ॥
ಮದಿನಾಗಳ್ ಪುದಿದಂತಿರಿರ್ಪುದುಮಿದೇನೀತಂಗೆನುತ್ತೆಲ್ಲರುಂ ।
ಪದೆದೆನ್ನಂ ನುಡಿವಂದದಿಂ ನೆರೆವೆನಿನ್ನೆಂದೋ ವಿರೂಪಾಕ್ಷನೇ ॥ ೧೦

ಕ್ರಮದಿಂ ಪೂಜಿಪ ಪೂಜೆ ಮೆಲ್ಲನೆ ಸಡಿಲ್ದಾನಂದಮೊಱ್ಕಾಡುತಿ ।
ರ್ಕೆಮ ಸೋತ್ಸಾಹದೆ ಕಣ್ಗಳೊಳ್ಸುಖರಸಂ ಹಸ್ತಂಗಳೊಳ್ಕಂಪನಂ ॥
ಕ್ರಮದೊಳ್ನರ್ತನಸಂಗದೊಳ್ಪುಳಕಮಾಜಿಹ್ವಾಗ್ರದೊಳ್ ಲಲ್ಲೆ ಸಂ ।
ಭ್ರಮದಿಂ ಪುಷ್ಪಲಡೆಂದು ಪೂಜಿಸುವೆನಾಂ ನಿನ್ನಂ ವಿರೂಪಾಕ್ಷನೇ ॥ ೧೧

ಸತಿಪುತ್ರರ್ ಮಿತ್ರರಾಪ್ತರ್ ತನುಧನಮನವೆಂಬಿಂತಿವಂ ನಿತ್ಯಮೆಂದು ।
ಚ್ಛತರವ್ಯಾಸಂಗದಿಂ ಮೆಯ್ಯುಱಿಯದೆ ಮರುಳಾಗಿರ್ದೆನೆನ್ನಂ ದುರಾಶಾ ॥
ವೃತನಂ ದುರ್ಮೋಹಿಯಂ ದುಸ್ತರತರವಿಷಯವ್ಯಾಪ್ತನಂ ದುರ್ಧರ್ರೈನೋ ।
ಹತನಂ ದುರ್ಬೋಧನಂ ರಕ್ಷಿಸುದೆಲೆ ಕೃಪೆಯಿಂದಂ ವಿರೂಪಾಕ್ಷಲಿಂಗಾ ॥

ಅನುಪಮದಾನಿಯಪ್ರತಿಮದಾನಿ ನಿರಂತರದಾನಿ ಸಂದ ಪೆಂ ।
ಪಿನ ಘನದಾನಿ ಕೌತುಕದ ದಾನಿ ಮಹೋನ್ನತದಾನಿಯೆಂದು ನಿ ॥
ನ್ನನೆ ಪೊಗಟುತ್ತುಮಿಂತಿರೆ ಸಮಸ್ತಜಗಜ್ಜನವೀಸುಕೀರ್ತಿಗೆ ।
ನ್ನನೆ ನಡೆ ನೋಡದಿರ್ಪರವರ್ಕನುಕೂಲಮೆ ಹಂಪೆಯಾಳ್ದನೇ ॥ ೧೩

ನಾನಾಜನ್ಮಂಗಳೊಳ್ಸಾರದ ಪರಿಭವಮಂ ಬಂದ ತನ್ನಂದಮಂ ತಾ ।
ನೇನೆಂದೊಂದೆಳ್ಳನಿತ್ತಂ ನೆನೆಯದು ತನಗಿಂತಿಚ್ಛೆಯಂತಿರ್ದು ನಿನ್ನೀ ॥
ಧ್ಯಾನಾರಂಭಕ್ಕಣಂ ಸಲ್ಲದು ಸುಡು ಸುಡು ಛೀ! ಮನ್ಮನೋವೃತ್ತಿ ನಿನ್ನಂ ।
ತಾನಾರೆಂ ನೀನೆ ಸಂತಂ ನಿಲಿಸಿದನೊಲವಿಂದಂ ವಿರೂಪಾಕ್ಷಲಿಂಗಾ ॥ ೧೪

ಪಸಿವಿಂದಂ ಬೇಂಟೆಗಂ ನಟ್ಟಡವಿಗೆ ನಡೆತಂದೇಱಿ ಬಿಲ್ವಾಗ್ರಮಂ ವ್ಯಾ ।
ಪಿಸವತ್ತಿತ್ತಂ ಮೃಗಧ್ಯಾನದೊಳಿರೆ ಶಿವರಾತ್ರಿವ್ರತಂಗೆಯ್ದನೆಂದಂ ॥
ದೊಸೆದಾಬೇಡಂಗೆ ಕೈಲಾಸದ ವಸತಿಯನಿತ್ತೋವಿದ್ಯೆ ಪಾಣಿದಾನ ।
ಚಿಸಿ ನಿನ್ನಂ ನಂಬಿದಂ ರಕ್ಷಿಸುದೆಲೆ ಕೃಪೆಯಿಂದಂ ವಿರೂಪಾಕ್ಷಲಿಂಗಾ ॥ ೧೫

ಮೋಹಕ್ಕೋರೊರ್ಮೆ ಮಾಧುರ್ಯದ ನುಡಿನೆಲೆಗೋರೊರ್ಮೆ ಸಂದಿರ್ದ
ಕಾಮೋ । ತ್ಸಾಹಕ್ಕೋರೊರ್ಮೆ ಮೆಯ್ವೆರ್ಚಿರ್ದಪಿವ ಮದಕೋರೊರ್ಮೆ
ಪೆರ್ಚಿರ್ದಲೋಭ ॥ ವ್ಯಾಹಕ್ಕೋರೊರ್ಮೆ ಕೋಪಪ್ರೋನ್ನತಿಯನುಮತಿ
ಗೋರೊರ್ಮೆ ಮೆಯ್ವೆರ್ಚಿ ಮದ್ದೇ ॥ ಹೋಹಂ ಎಂದೆಂಬುದಂ ಮಾಣಿ
ಸು ಮನಕಮಿದೊಂದಂ ವಿರೂಪಾಕ್ಷಲಿಂಗಾ ॥ ೧೬

ಮದನವಿರೋಧಿ ಬಾರ ಮುರಿತಾಂತಕ ಬಾರ ಪುರಾರಿ ಬಾರ ಶಾ ।
ರದಶಶಿಮೌಳಿ ಬಾರ ಫಣಿಕುಂಡಲ ಬಾರ ಮಹೇಶ ಬಾರ ಪು ॥
ಣ್ಯದ ನೆಲೆವೆರ್ಚಿ ಬಾರ ಸತತಂ ಪೊರೆವಾಳ್ದನೆ ಬಾರ ಮೋರೆದ ।
ಪ್ಪಿದ ಕರುಣಾಬ್ಧಿ ಬಾರ ವರ ಬಾರೆಲೆ ಬಾರೆಲೆ ಹಂಪೆಯಾಳ್ದನೇ ॥ ೧೭

ಹರಣಂಗಳ್ಕಳಿಯೇಱೆ ಲೋಚನಯುಗಂ ನೀರೇಱೆ ಮೆಯ್ಯೆಲ್ಲವಂ ।
ಘುರವೇಱಲ್ ನುಡಿ ಕಂಪವೇಱೆ ಕರಣಂಗಳ್ ಲೀಲೆಯೇಱಲ್ವೊಗಂ ॥
ಸಿರಿಯೇಱಲ್ ತಲೆಗೇಱಿಪುತ್ತವದೆ ನಿನ್ನಂ ಪೂಜಿಸುತ್ತಾನುಪಾ ।
ದರದಿಂದೀಕ್ಷಿಸುತಾಡುತಿರ್ಪುದೆನಗಿನ್ನೆಂದೋ ವಿರೂಪಾಕ್ಷನೇ ॥ ೧೮

ಕಯ್ಗೆ ನಮೋನಮೋ! ಪಡೆದು ಕಂಪಿಸುತೀಶ್ವರ ನಿಮ್ಮನರ್ಚಿಪಾ ।
ಬಾಯ್ಗೆ ನಮೋನಮೋ! ತೊದಳದುಣ್ಮುತೆ ಭಕ್ತಿಯೊಳೆಯ್ದೆ ಪಾಡುವಾ ॥
ಮೆಯ್ಗೆ ನಮೋನಮೋ! ಪುಳಕವಂ ಕಲಸಾಚರ್ತೆ ಸೋಂಕಿ ಪೆರ್ಚುವಾ ।
ಸುಯ್ಗೆ ನಮೋನಮೋ! ಬಿಡದ ಲಲ್ಲೆಯ ನೇಹದ ಹಂಪೆಯಾಳ್ದನೇ ॥ ೧೯

ಉಡುವೊಡೆ ಸಂತತಂ ಪುಲಿದೊವಲ್ ನಿಮಗಲ್ಲದೊಡಾದಿಗಂಬರಂ ।
ಪಡುವೊಡೆ ರುದ್ರಭೂಮಿ ನಿಮಗಲ್ಲದೊಡಾಸಿಗೆ ವೋತ್ತಮಾಂಗವು ॥
ಕೊಬ್ಬಿಡೆ ವಿಷವಲ್ಲದಿರ್ದೊಡೆ ಸಮಸ್ತಜಗಂ ನಿಮಗೇನನೆಂಬಪೆಂ ।
ತುಡುವೊಡೆ ಸರ್ಪನಲ್ಲದೊಡೆ ಕುಂಜರಚರ್ಮವೆ ಹಂಪೆಯಾಳ್ದನೇ ॥ ೨೦

ನವನಿಧಿ ಬಾರ ಪುಣ್ಯನಿಧಿ ಬಾರ ಮಹಾನಿಧಿ ಬಾರ ಭಕ್ತರು ।
ತ್ರವನಿಧಿ ಬಾರ ಭಾಗ್ಯನಿಧಿ ಬಾರ ಕೃಪಾನಿಧಿ ಬಾರ ಕಾಂತ್ರಿಯು ॥
ಘ್ನವನಿಧಿ ಬಾರ ಸಿತ್ರನಿಧಿ ಬಾರ ಕೃಪಾನಿಧಿ ಬಾರ ಸತ್ಯಸಂ ।
ಭವನಿಧಿ ಬಾರ ತತ್ತ್ವನಿಧಿ ಬಾರಲೆ ಬಾರಲೆ ಹಂಪೆಯಾಳ್ದನೇ ॥ ೨೧

ವಿನುತಬ್ರಹ್ಮಾಂಡವಂ ಸೃಷ್ಟಿಪ ಪರಪರ ಪಾಲಿಪ್ಪ ಸಾಮರ್ಥ್ಯದೊಂದೊಂ ।
ವನುವಂ ಕಂಡಾಗಳಾಪಿರ್ಂದಜಹರಿಗಳನಾಂ ಬಣ್ಣಿಸುತ್ತಿರ್ಪನೇ ಭೋಂ ॥
ಕನೆ ನಿಮ್ಮೊಂದಾಜ್ಞೆಯೆನ್ನೀ ಮನಕೆ ಮಸಕದಿಂ ಹಂಪು ತೋಱಲ್ಕೆ ಪೇೞನ ।
ಚ್ಚಿನ ವಾಕ್ಯಂ ಪುಟ್ಟಿಸಲ್ ಸುಮ್ಮನಿರುತೆ ಮಱವಟ್ಟಂ ವಿರೂಪಾಕ್ಷಲಿಂಗಾ ॥

ಪರಪರ ಕರ್ಮದೊಳ್ ಬಟಿಲದಿಂತು ಬಮರ್ಗಂಕಿದೆನ್ನೆ ಸದಾಶಿವಾ! ।
ನರಪರ ಸೇವೆಯೊಳ್ ಕುದಿಯದಿಂತು ಬಮರ್ಗಂಕಿದೆನ್ನೆ ಮುರಾರಿಯ ॥
ಸ್ಥಿರಪರದೈನದೊಳ್ ತೊಡರದಿಂತು ಬಡರ್ಗಂಕಿಪೆನ್ನೆ ಮಹೇಶ! ಮ ।
ನ್ನರುಹೆ ಪುರಾರಿ! ಪ್ರಾಜ್ಞನೆ ನಿಜಾಂಘ್ರಿಗೆ ಸಾರ್ಚಲೆ ಹಂಪೆಯಾಳ್ದನೇ ॥ ೨೩

ದೇವ ಮಹೇಶ ದೇವ ಗಿರಿಜಾಧಿಪ ದೇವ ಸಮಸ್ತದೇವಸಂ ।
ಜೀವನ ದೇವ ಕಾಮಮದಮರ್ದನ ದೇವ ಹಿರಣ್ಯಗರ್ಭವಿ ॥
ದ್ರಾವಣ ದೇವ ವಿಷ್ಣುನಯನಾರ್ಚಿತಪಾದಪಯೋಜ ದೇವ ಸಂ ।
ಸೇವಿತದೇವದೇವ ಮಮರಕ್ಷಕ ರಕ್ಷಿಸು ಪಂಪೆಯಾಳ್ದನೇ ॥ ೨೪

ಪುರಮಂ ಸುಟ್ಟವನೀತನೀತನೆ ಪರಬ್ರಹ್ಮಗೆ ಸಾಮರ್ಥ್ಯದೊಂ ।
ದಿರವಂ ಕೊಟ್ಟವನೀತನೀತನೆ ಮಹೋಗ್ರಾಭೀಳಸರ್ಪಂಗಳಾ ॥
ಭರಣಂದೊಟ್ಟವನೀತನೀತನೆ ಲಸಚ್ಛೀತಾಂಶುವಂ ಮೌಳಿಯೊಳ್ ।
ಸ್ಥಿರವಾಗಿಟ್ಟವನೀತನೀತನೆ ವಿರೂಪಾಕ್ಷಂ ಲಲಾಟೇಕ್ಷಣಂ ॥ ೨೫

ಪರಮೇಶ ಪ್ರಭುವೀತನೀತನೆ ದಿಟಂ ನಂಬಿರ್ದ ಭಕ್ತರ್ಗೆ ತ ।
ನ್ನಿರವಂ ತೋರುವನೀತನೀತನೆ ಜಗತ್ಸಂಹಾರಮಂ ಮಾಡುವಾ ॥
ಗರಳಂದಾಳ್ದವನೀತನೀತನೆ ಸಗರ್ವಂ ಪೆರ್ಚೆ ವಾಣೀಶನಂ ।
ಶಿರವಂ ಕಿಳ್ತವನೀತನೀತನೆ ವಿರೂಪಾಕ್ಷಂ ಲಲಾಟೇಕ್ಷಣಂ ॥ ೨೬

ವಸುಧಾವಂದಿತನೀತನೀತನೆ ಮಹಾನಾಟ್ಯಾಭಿರಂಗಂ ವಿರಾ ।
ಜಿಸಲಂದಾಡಿವನೀತನೀತನೆ ನಿತಾಂತಂ ಭಕ್ತಯೂಥಕ್ಕೆ ಸಂ ॥
ತಸಮಂ ಸಾರ್ಚುವನೀತನೀತನೆ ಮುರಾರಿಬ್ರಹ್ಮರೊಲ್ದಿಲ್ದು ಪ್ರಾ ।
ಜಿಸುವೀಶಪ್ರಭುವೀತನೀತನೆ ವಿರೂಪಾಕ್ಷಂ ಲಲಾಟೇಕ್ಷಣಂ ॥ ೨೭

ಸ್ಮರನಂ ನೋಡಿದನೀತನೀತನೆ ಸಮುದ್ಯತ್ಕೋಪದಿಂ ದಕ್ಷನ
ಧ್ವರಮಂ ಸುಟ್ಟವನೀತನೀತನೆ ಕಡುತ್ತೆಯ್ತಂದು ನಿಂದಂಧಕಾ ॥
ಸುರನಂ ಮೆಟ್ಟಿದನೀತನೀತನೆ ಕರಂ ಬಂದಾರ್ಪಿನಿಂದಂ ಗಜಾ ।
ಸುರನಂ ಸೀಳ್ದವನೀತನೀತನೆ ವಿರೂಪಾಕ್ಷಂ ಲಲಾಟೇಕ್ಷಣಂ ॥

ಜಿತತ್ರಿಷ್ಟಾಯುಧನೀತನೀತನೆ ಸರೋಜಾತಾಕ್ಷವಾಣೀಶವಂ ।
ದಿತಸರ್ವೇಶ್ವರನೀತನೀತನೆ ಸಹಸ್ರಾಕ್ಷಪ್ರಮುಖ್ಯಾಮರಾ ॥
ರ್ಚಿತಪಾದಾಂಬುಜನೀತನೀತನೆ ಕಪಾಳಾಭೀಳಮಾಲಾಮಂ ।
ಡಿತವಕ್ಷಸ್ಥಳನೀತನೀತನೆ ವಿರೂಪಾಕ್ಷಂ ಲಲಾಟೇಕ್ಷಣಂ ॥ ೨೯

ನತದೇವಾಧಿಪನೀತನೀತನೆ ವಿರಿಂಚೋಪೇಂದ್ರಮಧ್ಯಸ್ಥಿತೋ |
ದ್ಧತಲಿಂಗೋನ್ನತನೀತನೀತನೆ ಸಹಸ್ರಾಂಶುಪ್ರತಾನಾತುಲೋ ||
ನ್ನತತೇಜೋಮಯನೀತನೀತನೆ ಪರಂಜ್ಯೋತಿಸ್ಸ್ವರೂಪಪ್ರಕಾ |
ಶಿತಪುಣ್ಯೋದಯನೀತನೀತನೆ ವಿರೂಪಾಕ್ಷಂ ಲಲಾಟೇಕ್ಷಣಂ || ೨೦

ತ್ರಿಜಗತ್ಪೂಜಿತನೀತನೀತನೆ ಸುರರ್ ಕೊಂಡಾಡೆ ದಿವ್ಯಾಸ್ತ್ರಮಂ |
ವಿಜಯಂಗಿತ್ತವನೀತನೀತನೆ ಮನಂ ಮುಟ್ಟಿರ್ಪ ನಿಷ್ಠಾಸ್ವಭ ||
ಕ್ತಜನಕ್ಕಾಶ್ರಯನೀತನೀತನೆ ಲಸತ್ಸಾಮರ್ಥ್ಯದಿಂದಂ ವಿರೋ |
ವ್ರಜಮಂ ತಾಳ್ದವನೀತನೀತನೆ ವಿರೂಪಾಕ್ಷಂ ಲಲಾಟೇಕ್ಷಣಂ || ೨೧

ವೇದಕ್ಕುನ್ನತನೀತನೀತನೆ ಹರಿಬ್ರಹ್ಮಾದಿಗಳ್ ಮಾಳ್ಪ ಸಂ |
ವಾದಕ್ಕಗ್ಗಳನೀತನೀತನೆ ಶರಣ್ಬೊಕ್ಕಿರ್ಪ ಭಕ್ತಾಳಿಯಂ ||
ಕಾಪಂ ರಕ್ಷಿಪನೀತನೀತನೆ ಗಣವ್ರಾತಕ್ಕೆ ತಾಯ್ತಂದೆ ತಾ |
ನಾದಾಶಂಕರನೀತನೀತನೆ ವಿರೂಪಾಕ್ಷಂ ಲಲಾಟೇಕ್ಷಣಂ || ೨೨

ಶ್ರೀಗಂಗಾಧರನಂ ಶಶಾಂಕಶಿಖಿಮಾರ್ತಂಡತ್ರಿನೇತ್ರಾಂಕನಂ |
ಭೋಗೀಂದ್ರಾರ್ಚಿತನಂ ರತೀಶವಿಪಿನಪ್ರೋದ್ಭೂತದಾವಾಗ್ನಿಯಂ ||
ಯೋಗಿವ್ರಾತಪರೀತನಂ ಶರಣಹೃದ್ರಾಜೀವಸಪ್ತಾಶ್ವನಂ |
ನಾಗೇಂದ್ರಾಜಿನದಿವ್ಯವಸ್ತ್ರಧರನಂ ಕಂಡೆಂ ವಿರೂಪಾಕ್ಷನಂ || ೨೩

ಹರನಂ ಶಂಕರನಂ ಶಶಾಂಕಧರನಂ ಕಾಪಾಲಿಯಂ ಕಾಲನಂ |
ಹರನಂ ಶೂಲಿಯನೀಶನಂ ಗಿರಿಶನಂ ಭಾಳಾಕ್ಷನಂ ನೀಲಕಂ ||
ಧರನಂ ಭರ್ಗನನುಗ್ರನಂ ಪರಮನಂ ಸರ್ವಜ್ಞನಂ ಶಂಭುವಂ |
ಗಿರಿಜಾವಲ್ಲಭನಂ ಮನೋಜಹರನಂ ಕಂಡೆಂ ವಿರೂಪಾಕ್ಷನಂ || ೨೪

ಎನ್ನಾನಂದಸುಧಾಬ್ಧಿವರ್ಧನಕಳಾಸಂಪನ್ನನಂ ಚೆನ್ನನಂ |
ಮುನ್ನಾರುಂ ನೆರೆ ಕಾಣಬಾರದ ಲಸತ್ಕಾಪಾಲಿಯಂ ಶೂಲಿಯಂ ||
ಭಿನ್ನಾಭಿನ್ನಮೆನಲ್ಕೆ ಬಾರದ ಮಹಾನಿಸ್ಸೀಮನಂ ಭೀಮನಂ |
ಚೆನ್ನಂಗಂದುರೆ ತನ್ನನಿತ್ತ ವಿಭುವಂ ಕಂಡೆಂ ವಿರೂಪಾಕ್ಷನಂ || ೨೫

ಆನಂದಾಮೃತವಾರ್ಧಿಯಂ ಕೃಪೆಯೊಳೆನ್ನಂ ತೊಟ್ಟಿಗೊಂಡಾಳ್ವನಂ ।
ನಾನಾದೇವಕಿರೀಟಕೋಟಿವಿಲಸತ್ಪಾದಾಬ್ಜನಂ ಪ್ರತ್ಯಸಂ ॥
ತಾನಾಂಭೋಧಿಸುಧಾಂಶುವಂ ದುರಿತಘೋರಧ್ವಾಂತಮಾರ್ತಾಂಡನಂ ।
ಭಾನುಜ್ಯೋತಿರಗತರ್ಕ್ಯಕಾಂತಿಯುತನಂ ಕಂಡೆಂ ವಿರೂಪಾಕ್ಷನಂ ॥ ೩೬

ಅದೆ ನಾಗಾಸುರನುಗ್ರಚರ್ಮವದೆ ಮೇಣ್ ವ್ಯಾಘ್ರಾಸುರಾಕೃತ್ತಿ ನೋ ।
ಡದೆ ನಾರಾಯಣನೊಂದು ದೇಹವದೆ ತನ್ನೇತ್ರಂ ಸುರೇಂದ್ರಾಟಗಳ್ ॥
ಜೆವರಲ್ಕುಗ್ರಮುಗ್ರತಾಪಸಿಧಿಯುಟ್ಟಂ ತೊಟ್ಟನಾರ್ದ್ರತ್ತಿವಂ ।
ಪದದೊಳ್ ಪತ್ತಿಸಿದಂ ಭುಭುಗ್ರರ! ವಿರೂಪಾಕ್ಷಂ ಲಲಾಟೇಕ್ಷಣಂ ॥ ೩೭

ಗಣನೆಗೆ ಜಿಹ್ವೆಯುಂಟೆನಿಪ ಗರ್ವದೆ ಸಾವಿರನೋಪ್ಪೊ ದೇವರಂ ।
ದಣಿಸಟರಣ್ಣ ಪಂಪೆಯರಸಂ ನಿಟಿಲಂದೆಱೆದಿಂ ಬಿಱುಕ್ಕುವಂ ॥
ತ್ತಣ ಹರಿಯೆತ್ತಣಬ್ಜಭವನೆತ್ತಣ ವಾಸವನೆತ್ತಣಗ್ನಿಯೆ ।
ತ್ತಣ ಯಮನೆತ್ತಣ ತ್ರಿದಶಸಂಕುಳವೆತ್ತಣಭಾಸ್ಕರೇಂದುಗಳ್ ॥ ೩೮

ಬೆಳಗಿಂತೆಲ್ಲಿಯುಮಲ್ಲಿ ಪೋಗದೆ ಅಹಾ! ಅಃ! ಅಕ್ಕಟಾ! ಜೆಗ್ರವ ।
ಗ್ಗಳದಿಂಪಂ ತ್ರಿಪುರಂಗಳಂತವನದಾಹಂ ಸುಟ್ಟನಮ್ಮಮ್ಮ! ಭಾ ॥
ತಳದೊಳ್ಕೀನಖಿವಾಂತನಲ್ಲುಸಿರದಿರ್ ಮತ್ತಾರ್ ದಿಟಂ ಪೇಳ್ವೆನೇ ।
ತ್ರಿಳಿಯಲ್ ಪೋ! ಮದನಾರಿ ಪಂಪೆಯ ವಿರೂಪಾಕ್ಷಂ ಲಲಾಟೇಕ್ಷಣಂ ॥ ೩೯

ಮದನಂ ಪುಬ್ಬಿನಸಿ ಬಿಲ್ಲುಮಂ ಸರಲುಮಂ ಕೈಕೊಂಡು ಬಂದಾರ್ದು ಸ ।
ಮ್ಮದದಿಂದೆಚ್ಚೊಡೆ ಸಚ್ಚರಿತ್ರವಿಭು ನಿಷ್ಕಾಮಿ ಸ್ವತಂತ್ರಂ ಸಕೋ ॥
ಪದೆ ಭುಗ್ಭುಗ್ಭುಗಿಲೆಂಬಿನಂ ನೆಗಟ್ಟಿ ನೇತ್ರಜ್ವಾಲೆಯಿಂ ತೊಟ್ಟನೋ ।
ವದೆ ಸುಟ್ಟಂ ಮರುಳುಭಾಗ್ರ! ಪಂಪೆಯ ವಿರೂಪಾಕ್ಷಂ ಲಲಾಟೇಕ್ಷಣಂ ॥ ೪೦

ಮುಳಿದು ಭುಗಿಲ್ಭುಗಿಲ್ಭುಗಿಲೆನಲ್ ಸುಡನೇ ತ್ರಿಪುರಂಗಳಂ ಪ್ರೌಢ ।
ಪರಿಬಿಯೆ ಚಟಿಲ್ಚಟಿಲ್ಚಟಿಲೆನಲ್ ಸುಡನೇ ಕುಸುಮಾಸ್ತ್ರನಂ ಕರಂ ॥
ಕಳಿಯೆ ಛಿಳಿಲ್ಛಿಳಿಲ್ಛಿಳಿಲೆನಲ್ ಸುಡನೇ ಯಮನಂ ಮನುಷ್ಯ ನಿಂ ।
ತಿಳಿವೊಡನೀತಿಯಂ ಬಿಸುಟು ನಂಬಿ ಶರಣ್ಬುಗು ಪಂಪೆಯಾಳ್ವನಂ ॥ ೪೧

ಭಕ್ತರ ಬಂಧು ಭಕ್ತರ ಮಹಾನಿಧಿ ಭಕ್ತರ ಭಾವಸಂಪದಂ ।
ಭಕ್ತರ ಮಾತೆ ಭಕ್ತರ ಪಿತಂ ನಿಜಭಕ್ತರ ಪುಣ್ಯದೇಟ್ತರಂ ॥
ಭಕ್ತರ ಮೂರ್ತಿ ಭಕ್ತರ ಸುಧಾಂಬುಧಿ ಭಕ್ತರ ಜೀವಮುನ್ನತಂ ।
ಭಕ್ತರ ಪೆಂಪು ಭಕ್ತಜನಕಂ ನೆರೆ ಹಂಪೆಯ ದೇವನೊಚ್ಚತಂ ॥ ೪೨

ಶರಣಂ ಸಂಸಾರಿಯೋ ಮಾಣ್ ಪ್ರಸಿದ್ಧಪ್ರಸಿಯೆನಸುಂ ಕಾಮಿಯೋ ಪೇೞಲೆಂ
ತುಂ । ಶರಣಂ ತಾಂ ಕ್ರೋಧಿಯೋ ಸಲ್ಲದು ತೆಗೆ ಶರಣಂ ಮರ್ತ್ಯನೇ ಅಲ್ಲ
ವೈ ಕೇಳ್ ॥ ಶರಣಂ ನಿರ್ವಾಣಯನೆಂತುಂ ಶರಣನತುಳನಿಷ್ಕಾಮಿಯೆಲ್ಲಂದ
ದಿಂದಂ । ಶರಣಂ ಶಾಂತಂ ನಿತಾಂತಂ ಶರಣನಮನು ತಾನೇ ವಿರೂಪಾಕ್ಷಲಿಂಗಂ ॥

ಅದು ಕಣ್ಣಪ್ಪನ ಪೂಜೆಯೋಜೆ ಬಗೆಯಲ್ವೇದೋಕ್ತಮೋ ಬೇಂಟೆಯಾ ।
ಡಿದ ಜೊಮ್ಮಣ್ಣನ ಭಕ್ತಿಭಾವವಱಿಯಲ್ ವೇದೋಕ್ತಮೋ ತಂದೆಯ ॥
ನ್ನದೆ ಚಂಡೇಶ್ವರಪಿಳ್ಳೆ ಮಾಡಿದುದು ಪೇಳ್ವೇದೋಕ್ತಮೋ ಆತನೊ ।
ಲ್ದುದೆ ವೇದಾಗಮನೀತಿ ಹಂಪೆಯ ವಿರೂಪಾಕ್ಷಂ ಲಲಾಟೇಕ್ಷಣಂ ॥ ೪೪

ಉಣಿಸುಂ ಸ್ತ್ರೀಸಂಗಮುಂ ನಿದ್ರೆಯುಮಿವು ಮಲಮೂತ್ರಂಗಳುಂ
ಕಾಂಬುಗುಂ ಸ । ದ್ಗುಣಮುಂ ಶಾಂತತ್ವಮುಂ ಕಾಂತಿಯುಮುರುತರಸಾ
ರೋಗ್ಯಮುಂ ಪೆರ್ಚುಗುಂ ಸಂ ॥ ದಣಿಸಿದಾ ಕ್ರೋಧಮುಂ ಮತ್ಸರಮತಿ
ಭಯಮುಂ ಮೋಹಮುಂ ಗರ್ವಮುಂ ತ । ಲ್ಲಣಮುಂ ತೀರ್ಗುಂ ದಿಟಂ
ನಿನ್ನಯ ನಿಜಶರಣಂಗಂ ವಿರೂಪಾಕ್ಷಲಿಂಗಾ ॥ ೪೫

ಪರಿಕಿಪರುಂಟೆ ಹಂಪೆಯಧಿನಾಥನ ಭಕ್ತರ ಸದ್ಗುಣಂಗಳಂ । ಪರಪರ
ಪೇೞ್ವೊಡೆನ್ನಳವೆ ಕೇಳ್ವೊಡೆ ನಿನ್ನಳವೇ ಪುರಾತನರ್ ॥ ಪರಿದುದೆ ಗಂಗೆ
ನಿಂದುದೆ ಸುತೀರ್ಥಮೊಡರ್ಚಿದುದೇ ಸುಕಾರ್ಯಮಿ । ನ್ನಱಿಯುವರಿರ್ಪ
ದೇ ಸಭೆ ನಿರೀಕ್ಷಣೆಗುಳ್ದುದೆ ಲೋಕಪಾವನಂ ॥ ೪೬

ಇದು ದಿಟವೆಮ್ಮ ಹಂಪೆಯಧಿನಾಥನ ಭಕ್ತರ ಮುಂದದಾವನೋ । ಅದಿ
ರದೆ ನಿಲ್ವನಂತಕಮನೋಜಚತುರ್ಮುಖನಬ್ಜನೇತ್ರನೆಂ ॥ ದೊಡವಿದತ
ರ್ಕರೆಂಬವಗೆ ಸುಷ್ಟಸಬಾರದು ರೂಪುದೋಱಬಾ । ರದು ತಳೆಯೆತ್ತ
ಬಾರದೆಮೆಯಿಕ್ಕಲೆ ಬಾರದಿಳಾತಳಾಗ್ರದೊಳ್ ॥ ೪೭

ಉರಿ ನಡೆವಂತೆ ಭಾನು ನಡೆವಂತೆ ಸಿಡಿಲ್ ನಡೆವಂತೆ ನಿನ್ನ ಭ ।
ಕ್ತರ ನಡೆ ದೂಷಕಾವಳಿಗೆ ಹಂಪೆಯ ದೇವನೆ ಸಾತ್ವಿಕರ್ಗ್ಗೆ ಸ ॥
ಚ್ಚರಿತಶಿವಾರ್ಚಕರ್ಗ್ಗೆ ಸುಖಪೂರಿತಶಾಂತಿವಿಭೂಷಣರ್ಗೆ ಕೇಳ್ ।
ಸಿರಿ ನಡೆವಂತೆಯಿಂದು ನಡೆವಂತೆ ಸುಖಂ ಸುಳಿವಂತೆ ಧಾತ್ರಿಯೊಳ್॥ ೪೮

ಘನಚೋದ್ಯಂ ನಿನ್ನ ಭಕ್ತಾಳಿಯ ನಡೆವಳಿ ಬೇಱೊಂದು ಸತ್ಸಂಸ್ಥೆ ಬೇ
ಱೊಂ । ದು ನಿಜಂ ಬೇಱೊಂದು ದೇಹಾಕೃತಿ ಹರಹರ! ಬೇಱೊಂದು ಸಂ
ಪತ್ತು ಬೇಱೊಂ ॥ ದನು ಬೇಱೊಂದಿಚ್ಛೆ ಬೇಱೊಂದಘಟಿತಘಟಿತಂ ಬೇಱು
ದೊಂದಾಜ್ಞೆ ಬೇಱೊಂ । ದಿನಿದಾಹಾ! ಕೌತುಕಂ ಸುಟ್ಟಿಸಲರಿವರಿದೋ
ಹೋ! ವಿರೂಪಾಕ್ಷಲಿಂಗಾ ॥ ೪೯

ಜಾಣರದುಂಟದುಂಟಹಹ! ದುರ್ವಿಷಯಂಗಳನೊಂದಿ ಬಾಳ್ವವರ್ ।
ಜಾಣರದುಂಟದುಂಟಹಹ! ಕಾಲನ ಬಾರಿಗೆ ಬಿಳ್ದು ನೋವವರ್ ॥
ಜಾಣರದುಂಟದುಂಟಮಮ! ದುಸ್ಸ್ಪೃಹೆಯೊತ್ತಿ ಮುಸುಂಕಿ ಸಾವವರ್ ।
ಜಾಣರೆ ಜಾಣರಿಂದಿಹಪರಕ್ಕಲೆ ಭಕ್ತರೆ ಹಂಪೆಯಾಳ್ದನೇ ॥ ೫೦

ಇಲ್ಲಿ ಜಗಕ್ಕೆ ಪೂಜಿತರುಮಲ್ಲಿ ಪರಕ್ಕೆ ವಿಶೇಷಪೂಜ್ಯರಿಂ ।
ತಿಲ್ಲಿಯುಮಲ್ಲಿಯುಂ ಮೆಱೆವರೆಲ್ಲಿಯುಮೆಮ್ಮ ಶಿವಾರ್ಚಕರ್ ಮಾ ॥
ಣೆಲ್ಲಿಯ ವಿಷ್ಣುವೆಲ್ಲಿಯಜನೆಲ್ಲಿಯ ವಾಸವನೆಲ್ಲಿಯಗ್ನಿಯಿಂ ।
ತೆಲ್ಲಿಯ ಮಾತು ಮೂಜಗದೊಳಾರ್ ಸರಿ ಪೇೞಲೆ ಹಂಪೆಯಾಳ್ದನೇ ॥ ೫೧

ನೋಡಿತೆ ಮಂಗಳಂ ನೆನೆಪೆ ಮಂಗಳಮಿರ್ದೆಡೆ ಮಂಗಳಂ ಕರಂ ।
ಪಾಡಿತೆ ಮಂಗಳಂ ಶರಣರೆಂದುದೆ ಮಂಗಳಮೊಲ್ದವರ್ ಮನಂ ॥
ಗೂಡಿತೆ ಮಂಗಳಂ ನಡೆಯೆ ಮಂಗಳಮಾಡಿತೆ ಮಂಗಳಾತ್ಮಕಂ ।
ಮಾಡಿತೆ ಮಂಗಳಂ ಪರಮಮಂಗಳಮೈಯೆಲೆ ಹಂಪೆಯಾಳ್ದನೇ ॥ ೫೨

ಕಲಿಯಾತಂ ಕಾಂತನಾತಂ ಕಮನಭರಿತನಾತಂ ಕಲಾಕಲ್ಪನಾತಂ ।
ಕಲಿಯಾತಂ ಭೋಗಿಯಾತಂ ಭರಣವಿನುತನಾತಂ ಚಿದಾನಂದನಾತಂ ॥
ಚಲಿಯಾತಂ ಸತ್ಯನಾತಂ ಬುಧಜನಹಿತನಾತಂ ಜಗತ್ಪೂಜ್ಯನಾತಂ ।
ಸಲೆ ನಿಮ್ಮಂ ನಂಬಿ ನಿಚ್ಚಂ ಮಱೆಯದೆ ನೆನೆದಾತಂ ವಿರೂಪಾಕ್ಷಲಿಂಗಾ॥ ೫೩

ಕಲಿಯಾವಂ ಶಿವಭಕ್ತನೆಚ್ಚಸುಖಿಯಾವಂ ಭಕ್ತನಾವೃತ್ತಿದಿಂ ।
ಚಲಿಯಾವಂ ಶಿವಭಕ್ತನುತ್ತಮನದಾವಂ ಭಕ್ತನೆಲ್ಲಂವದಿಂ ॥
ಬಲಿಯಾವಂ ಶಿವಭಕ್ತನೂರ್ಜಿತನದಾವಂ ಭಕ್ತನೀಶಂಗೆ ಪೇಳ್ ।
ಚೆಲ್ವಾವಂ ಶಿವಭಕ್ತನುನ್ನತಯಶಂ ಭಕ್ತಂ ವಿರೂಪಾಕ್ಷನಾ ॥ ೫೪

ಕೊಂದಂ ಭಕ್ತಿಪ್ರರಸ್ಪರಂ ಮಗನನಾ ಶ್ರೀಯಾಳನೇನಾಯ್ತು ಮೇಣ್ ।
ಕೊಂದಂ ಭಕ್ತಿಪ್ರರಸ್ಪರಂ ಜನಕನಂ ಚಂಡೇಶನೇನಾಯ್ತು ಪ್ರೇ ॥
ಕೊಂದಂ ಭಕ್ತಿಪ್ರರಸ್ಪರಂ ಜನನಿಯಂ ತಾಂ ರಾಮನಾಥಂಗದೇಂ ।
ಕುಂದಾಯ್ತೇ ತೆಗೆ ಭಕ್ತಿಯುಳ್ಳೊಡತಿ ಸದಾಚಾರಂ ವಿರೂಪಾಕ್ಷನಾ ॥ ೫೫

ಮದಮಂ ಪೋಣ್ದು ದುರಾಶೆಯಂ ಪಱಿದು ಕಾಮಾಸಕ್ತಿಯಂ ಬಿಟ್ಟು ಸ ।
ನ್ಮುದದಿಂ ಲಿಂಗಮನೊಲ್ದು ನೋಡಿ ನಲಿವಾ ಸದ್ಭಕ್ತನಪ್ಪಾತನಿ ॥
ರ್ದುದೆ ತಾರಾಚಲಮಾತನಿರ್ದುದೆ ಹಿಮಾದ್ರೀಂದ್ರಂ ಜಱಿಕ್ಕಾತನಿ ।
ರ್ದುದೆ ವಾರಾಣಸಿಯಾತನಿರ್ದುದೆ ವಿರೂಪಾಕ್ಷಂಗೆ ಪಂಪಾಪುರಂ ॥ ೫೬

ಪೆಱತೊಂದಂ ನುಡಿಯಂ ಪ್ರಪಂಚರಹಿತಂ ಕಾರ್ಪಣ್ಯಮಂ ಮಾಡನೊ ।
ಲ್ದೆಱಗಂ ಕಾಮದ ಬಟ್ಟೆಯತ್ತಲೆಳಸಂ ತರ್ಕಕ್ಕೆ ಮಾತ್ಸರ್ಯಮಂ ॥
ಪಱಿಯಂ ಲೋಕದ ಮಾನಸರ್ಗೆ ಮಣಿಯಂ ಸದ್ಭಕ್ತಸತ್ಸಂಗಮಂ ।
ತೊಱೆಯಂ ಸತ್ಯಮನಲ್ಲದಾಡನಚಲಂ ಭಕ್ತಂ ವಿರೂಪಾಕ್ಷನಾ ॥ ೫೭

ನಿರಪೇಕ್ಷಂ ಕರುಣಾಕರಂ ಸುಖಮಯಂ ಶಾಂತಂ ಮಹೋತ್ಸಾಹಿ ಭ ।
ಕ್ತಿರತಂ ಮಂಗಳಮೂರ್ತಿ ಲಿಂಗಸುಲಭಂ ಸಂತೋಷಿ ಸತ್ಯಂ ವಿಮು ।
ತ್ಸರನುರ್ವೀಜನವಂದ್ಯನುನ್ನತನನೇಕಾಶ್ಚರ್ಯಯುಕ್ತಂ ಮಹೇ ।
ಶ್ವರನಾತಂಗರಿಮಂಟೆ ಪಂಪೆಯ ವಿರೂಪಾಕ್ಷಪ್ರಸಾದಾನ್ವಿತಂ ॥ ೫೮

ಶಿವಭಕ್ತರ್ ಮಟ್ಟಿದಂಘ್ರಿಕಣಮೆ ಸಕಲತೀರ್ಥಂಗಳೆಂದೆಂಬುವಂ ಕಂ ।
ಡೆವಲಾ ಕಣ್ಣಿಪ್ಪನೊಳ್ ಮಾಡಿಮುದೆ ಜಗಕೆ ಸನ್ಮಾರ್ಗವೆಂದೆಂಬುವಂ ಕಂ ॥
ಡೆವಲಾ ಜೊಮ್ಮಣ್ಣನೊಳ್ ಮೆಟ್ಟಿದ ಧರೆ ಪರಮಕ್ಷೇತ್ರಮೆಂದೆಂಬುವಂ ಕಂ ।
ಡೆವಲಾ ಘೋಗಣ್ಣನೊಳ್ ಪೋ! ಶರಣರ ಪರಿಪಿಂತೇ ವಿರೂಪಾಕ್ಷ ನಿನ್ನಾ ॥

ನತರಾಗಲ್ ಕಾದಪರ್ ನಿಂದಿರಲಸವಸದಿಂ ಕೊಂದಪರ್ ಭೀತಿಯೊಳ್ ಸಂ ।
ಯುತರಾಗಲ್ ಬಿಟ್ಟಪರ್ ತಾಂ ಮಱೆವುಗಲಸೆಪ್ಪುಗಂ? ಪವಂವರ್ಪರತ್ತು ॥
ನ್ನತೆಯಿಂ ನಾಕೋರ್ವಿಯುಂ ಜೀವಮನುರೆ ಕುಡುವರ್ ಮಾನದೊಳ್ ಶೌರ್ಯ
ದೊಳ್ ವಾ । ರತೆಯೊಳ್ ಭಕ್ತರ್ಗೆ ಪೋ! ಮಾಣ್ ಸರಿ ದೊರೆ ಸಮನಾ
ಪಂ ವಿರೂಪಾಕ್ಷಲಿಂಗಾ ॥ ೬೦

ಆವನಂ ನೋಡಿದ ಕಣ್ಗೆ ಮತ್ತೆ ಕೆಲವುಂ ರೂಪೇ ವಿರೂಪಾಕ್ಷನೆಂ ।
ಬವನಂ ಪುಟ್ಟಿದ ಕೈಗೆ ಮತ್ತೆ ಕೆಲವುಂ ಮೆಯ್ಯೇ ಪೆಸರ್ಗೇಳ್ದು ಮ ॥
ಚ್ಚಿ ಶ್ರವಣಕ್ಕಕ್ಕಟ! ನೋಡ ಮತ್ತೆ ಕೆಲವುಂ ನಾಮಂಗಳೇ ಸ್ತೋತ್ರಮಂ ।
ಸವಿದಾನಾಲಗೆಗೊರ್ಮೆ ಮತ್ತೆ ಕೆಲವುಂ ವಾಣ್ಮಾಣ ಶಬ್ದಂಗಳೇ ॥ ೬೧

ಪ್ರೌಢನಿರ್ಗಂತಿರೆ ಕೋಟಿಕೂಟಕುಬೇರ್ದ್ಯೈಸಕ್ತಾಸೆಯುಂ ಮಾಡದಿರ್ ।
ಕಿಡದಿರ್ ಮಾನವ ಬೇಡ ಬೇಡ ಸಲೆ ಪ್ರಾಣಗ್ಗಂಡಕ್ಕಟಾ! ಸಾರಿದೆಂ ॥
ನತೆನೋಡರ್ಚಿಸು ಕೀರ್ತಿಸಾದರಿಸು ಮತ್ತಾನಂದದಿಂ ಬೇಡು ಬ ।
ಲ್ಲಿದಿ ನಂಬೀಗಳ್ ನಚ್ಚು ಮೆಚ್ಚು ನಲವಿಂದೆಂದುಂ ವಿರೂಪಾಕ್ಷನಂ ॥ ೬೨

ಸಾಲದೆ ನಿನ್ನ ಚಂಚಲತೆ ಸಾಲದೆ ನಿನ್ನ ಮದೋದ್ಧತಾಗುಣಂ ।
ಸಾಲದೆ ನಿನ್ನ ದುರ್ಮಮತೆ ಸಾಲದೆ ನಿನ್ನ ತಮೋವಿವರ್ಧನಂ ॥
ಸಾಲದೆ ನಿನ್ನ ದುಷ್ಪ್ರಕೃತಿ ಸಾಲದೆ ನಿನ್ನ ದುರಾಶೆಯುಜ್ಜುಗಂ ।
ಸಾಲದ ಮೋಹದಿಂದು ಮನವೇ ನೆನೆ ಪಂಪಿನ ಹಂಪೆಯಾಳ್ವನಂ ॥

ಅಕ್ಷಯಸಂಪದಂ ಕಿಡದ ಕೀರ್ತಿಯನೂನಪರಾಕ್ರಮಂ ಧರಾ ।
ರಕ್ಷಣಶಕ್ತಿ ದರ್ಪಕನನೇಱಿಪ ರೂಪಿನಿತೆಲ್ಲವಣ್ಣ ಕೇ ॥
ಳೀಕ್ಷಣದಿಂದೆ ಬರ್ಪುದೆಲೆ ಮಾನವ ಮಾಣದಹರ್ನಿಶಂ ವಿರೂ ।
ಪಾಕ್ಷನನರ್ಚಿಸುನ್ನತಸನರ್ಚಿಸಜಾತನನರ್ಚಿಸಲ್ಕಿಱಿಂ ॥ ೬೪

ಬಿಡು ಕರ್ಮಂ ದೈವಮೆಂದೆಂಬವರಬೀಸುಡಿಯುಂ ಬ್ರಹ್ಮರೊಳ್ದಕ್ಷನೆಂಬಂ ।
ಮೃಡನೇಕಂಪೆಲ್ಲರಂ ಬಲ್ಲರನೆ ನೆರಪಿಕೊಂಡಾಡಿದಾಯಜ್ಞಕರ್ಮಂ ॥
ಗಡ! ಭಸ್ಮೀಭೂತವೇನಾಗದೆ ಸುಡು! ಸುಡು! ಮತ್ತಂ ವೃಥಾಕರ್ಮಮೊಂದು ।
ಗ್ಗಿಸಲ್ವೇತೊಬ್ಬನಂ ಬೇಡಹವನನೊಸೆದೀವಂ ವಿರೂಪಾಕ್ಷಲಿಂಗಂ ॥ ೬೫

ಬಿಡು ಮಾಣ್ಮಾಣೆಲೆ ಬೊಮ್ಮಪಾದಿ ಸಟೆಯಂ ನೀಂ ನಂಬಿಗೋೞಿಯೆನ್ನನೇ
ವ್ವೃಡನಂದಾಡನೆ ನಮ್ಮ ಗೂಡಯುನ ಮುಂದಾವಾಸಿಮುಯ್ಯಂ ಕುತ್ತ ॥
ಲ್ಕುಡನೇ ಸ್ಸಿರೆಯುನ್ನುಣ್ಣನೇ ಸಿರಿಯುನಾಳ್ವಂ ಪೇೞೆ ಕೈಲಾಸವಂ ।
ಕ್ಕುಡನೇ ಸೂರೆಯುನೆಮ್ಮ ನಿಂಬಿಗೆ ವಿರೂಪಾಕ್ಷಂ ಲಲಾಟೇಕ್ಷಣಂ ॥ ೬೬

ಕೊಡಗೂಸೊರ್ವಳದೊಂದು ಬಟ್ಟಲೊಳೆ ಪಾಲಂ ತಂದು ಮುಂದಿಟ್ಟು
ನೀಂ । ಕುಡಿಯೆಮ್ಮವ್ವೆ ದಿಟಂ ಈರಂ ಬಡಿವಳೆಂದಟ್ಟಿಟ್ಟು ಕಾರ್ಪಣ್ಯದಿಂ ॥
ನುಡಿಯಲ್ಕಾನುಡಿಗಂಜಿ ತಾನರರೆ! ಕಾರುಣ್ಯಾಕರಂ ಜಾಱಿಯಿಂ । ಕುಡಿ
ದಂ ಪಾಲನದೇಂ ಕೃಪಾಳುವೊ ವಿರೂಪಾಕ್ಷಂ ಲಲಾಟೇಕ್ಷಣಂ ॥ ೬೭

ಮುಪಮಂ ಧಾತ್ರಿಗೆ ಮಾಳ್ಪುದಾವುದು ಶಿವಾಚಾರಂ ಗಣಾಧೀಶನ ।
ಭ್ಯುದಯಕ್ಕಾಸ್ಪದಮೆಂಬುದಾವುದು ಸದಾಚಾರಂ ಶಿವಾಚಾರವು ॥
ಲ್ಲದೆ ಬೇಱಿಲ್ಲದು ತಾನೆ ವಾಂಛಿತಕರಂ ನಂಬಾಗಳುಂ ಸಾರ್ದು ನೀಂ ।
ಪನಪಿಂ ಮಾನವ ಮಾಡು ಲೇಸಿದು ಶಿವಾಚಾರಂ ವಿರೂಪಾಕ್ಷನಾ ॥ ೬೮

ಅನುಪಮಮಾರ್ಗದೆಮ್ಮ ಪಶಿಮೌಳಿಯ ಸಚ್ಚರಿತಂ ಧರಿತ್ರಿಗೊ ।
ರ್ವನೆ ಗಣನಾಥನೆಂಬ ಶಿವಭಕ್ತನ ನೇಮವನೊಲ್ದು ನೋಡಿ ನ ॥
ಚ್ಚಿನ ಸುಖವೇೞೆ ಲೋಕವಱಿಯಲ್ ಪೊಗಲೇಱಿಸಿ ಕೊಂಡುಪೋದನಾ ।
ತನನನಿಮಿತ್ತಬಂಧುವನದೇನೆನುತಿರ್ಪೆ ಪಂಪೆಯಾಳ್ದನಂ ॥ ೬೯

ಸ್ಮರನಿಂ ಬೆಂದುರಿಸಂಗೆ ರೋಗತತಿಯಿಂದಂ ನೊಂದಬಲ್ವಂಗೆ ನಿ ।
ಷ್ಠುರಮುಗ್ರಂ ಪರುಷಂಗಳಿಂ ಬೞಲ್ವವಂಗತ್ಯುಗ್ರತಾಪಂಗಳಿಂ ॥
ಕೊರಗುತ್ತಿರ್ಪವಂಗೆ ಶತ್ರುಭಯದಿಂ ಬೆಳ್ಕಾಗಿ ಬೀೞ್ವಂಗೆ ಸಾ ।
ದರದಿಂ ಕಾಯಲಿದೊಂದೆ ಸಾಲ್ವುದು ದಿಟಂ ನಾಮಂ ವಿರೂಪಾಕ್ಷನಾ ॥ ೭೦

ಮನಮೊಸೆದರ್ಚಿಸರ್ಚಿಸು ಪೊಗೞ್ದು ಪೊಗೞೊಳ್ದನನಾಳ್ದನಂ ಕರಂ ।
ನೆನೆನೆನೆ ನೋಡುನೋಡು ಮಱೆಗೊಳ್ ಮಱೆಗೊಳ್ ನೆರೆ ನಂಬುನಂಬು ಕೆ ॥
ಮ್ಮನೆ ಕೆಡಬೇಡ ಬೇಡ ಭರದಿಂ ಸಲೆ ಮಚ್ಚಲೆ ಮಚ್ಚುಮಚ್ಚು ಮಂ ।
ಚನೆಗಿತೆ ನಚ್ಚುನಚ್ಚು ಮಿಗೆ ಬಲ್ಪಿಡಿ ಬಲ್ಪಿಡಿ ಪಂಪೆಯಾಳ್ದನಂ ॥ ೭೧

ಭರದಿಂ ಲಿಂಗಾರ್ಚನಂಮಾಡದ ಶಿವಕುಲವುಂಟೇ ಶಿವಾಚಾರಮುಂ ಸ ।
ದ್ಗುರುವೆನ್ನಂ ಪೇಳ್ದಿಸಂತಂತನರವರೊಲವಿಂ ಸ್ವೇಚ್ಛೆಯಿಂ ಧರ್ಮನಂ ಶಂ ॥
ಕರನಂ ಸರ್ವೇಶನಂ ಪೂಜಿಸುವ್ರಜದೊಳಗಂತಾಯಿತ್ತಿಂತಾಯಿತೆಂದೆ ।
ಲ್ಲರ ಮುಂದಾಕ್ಷೇಪದಿಂ ನಿಂ ಕಿಡದೆ ನೆನೆ ವಿರೂಪಾಕ್ಷನಂ ಕಾಂಕ್ಷೆಯಿಂದಂ ॥

ಗುರುಮತದಿಂ ಶ್ರುತಿಸ್ಮೃತಿಮತಂಗಳನಿಷ್ಟಮತಂಗಳಿಂದಮಾ ।
ಪ್ತರ ಮತದಿಂದೆ ನೀನೊಡೆಯನೆಂದಜದೀಶ್ವರ ನಿನ್ನನರ್ಚಿಸ ॥
ಲ್ಕರಿಯದೆ ಸರ್ವರೊಳ್ ಪಲವು ತರ್ಕಿಸಿ ನೋಯಿಸಿ ನೋಯುತುಂ ವೃಥಾ
ನೆರೆಮನೆಗೆಟ್ಟು ಕಣ್ಗೆಡುವರೇಂ ಮರುಳ್*ಗೊಂಡರೊ ಪಂಪೆಯಾಳ್ದನೇ ॥ ೨೩

ತೆಗೆ ತೆಗೆ ಮಿಕ್ಕ ಕೂಟಕುಱುದೇವರನಾವಗಮರ್ಚಿಪಕ್ಕಱಿಂ ।
ಬಗೆ ಬಗೆ ಚಂದ್ರಚೂಡನ ಪದಾಂಬುಜಮಂ ಮನವಾರೆ ಭಕ್ತಿಯಿಂ ॥
ಪಗಿವಗಿಪಂಗದೊಳ್ ಪುಳಕವೇಳ್ತರಲೆಳ್ದು ಪೊಗಳ್ದು ಲೀಲೆಯಿಂ ।
ನೆಗೆನೆಗೆದಾಡಿ ಮೆಯ್ಮಱೆದು ಪೂಜಿಸು ಮಾನವ ಪಂಪೆಯಾಳ್ದನಂ ॥ ೨೪

ಇದು ಪಲ ಪೂರ್ವದಿಂ ಮನುಜಜನ್ಮದೊಳುದ್ಭವಿಸಿರ್ದು ಮೂಗನಾ ।
ಗದೆ ಸಲೆಯಂಧನಾಗದೆಲೆ ಪಂಗುವುಮಾಗದೆ ಕೂನದೇಹನಾ ॥
ಗದೆ ವಿಕಟಾಂಗನಾಗದೆ ಕಿವುಡನುಮಾಗದೆ ಹೀನವರ್ಣನಾ ।
ಗದೆ ಮೆಱೆವಲ್ಲಿ ಮಾನವ ಮಹೋತ್ಸವದಿಂ ನೆನೆ ಪಂಪೆಯಾಳ್ದನಂ ॥ ೨೫

ಅಱುತುಮರ್ಚಿಸುಬ್ಬರಿಸುತರ್ಚಿಸು ಮತ್ತೊಲೆಯುತ್ತುಮರ್ಚಿಸಿಂ ।
ಪೇಱುತುಮರ್ಚಿಸುನ್ನತಿಯೊಳರ್ಚಿಸು ಕೊರ್ವುತುಮರ್ಚಿಸೆಲ್ಲರೊಳ್ ॥
ಸೇಱುತುಮರ್ಚಿಸೀಜನನಮಂ ಪಡೆದಲ್ಲಿ ಮನುಷ್ಯ ಏನುಮಂ ।
ಮಾಱದೆಯರ್ಚಿಸೆಮ್ಮ ಕಡುಸೊಂಪಿನ ಪೆಂಪಿನ ಪಂಪೆಯಾಳ್ದನಂ ॥ ೨೬

ಎಲೆಲೆಲೆ ಸಾರಿದೇನೆಲೆಲೆ ಸಾರಿದೆನಕ್ಕಟ! ಸಾರಿದೆಂ ವೃಥಾ ।
ಚಲಿಸದಿರಿಲ್ಲಿ ಪುಟ್ಟುವವ ಪೂರ್ವಮ ಪೂರ್ವಮ ಪೂರ್ವಮುಟ್ಟಿಯಿಂ ॥
ನಲಿನಲಿದುಬ್ಬಿ ಜೊಬ್ಬಿಡುತೆ ಕೊರ್ಬುತೆ ಕೂಗುತೆ ಪಾಡುತಾಡುತ ।
ಗ್ಗಲಿಸುತೆ ಬೇಗಿ ತೂಗುತೊಸೆನರ್ಚಿಸು ಮಾನವ ಪಂಪೆಯಾಳ್ದನಂ ॥ ೨೭

ಮನೆ ನೆಬಿಲಾಗೆ ಪೆಂಡಿರಿನಿದಾಗೆ ಸುತರ್ ಪಿರಿದಾಗೆ ಯರ್ಥದಾ ।
ಜನೆ ಘನವಾಗೆ ಯೌವನಮುದಾಗೆ ಬಟಿಕ್ಕನನೇನನೆಂಬಪೆಂ ॥
ತನತನಗುಬ್ಬಿತಂಕುರಿಸುತುಂ ನೆರೆ ಪಲ್ಲವಿಸುತ್ತೆ ಪರ್ವುತುಂ ।
ನನೆಕೊನೆವೋಗಿ ಪಾಯು ಕೊಳಕಾಡದೆ ಪಾಣ್ಬಳೆ ಪಂಪೆಯಾಳ್ದನೇ ॥

ವರಸುಖ್ಯಂ ಶಂಕರಾಖ್ಯಂ ಸಕಲಜನಹಿತೋಪಾಖ್ಯಾನಾನಂದಸೌಖ್ಯಂ ।
ಸ್ಥಿರಕಾಯಂ ಕಾನಜೇಯಂ ಧವಳತರತನುಚ್ಛಾಯನಾನಂದಕಾಯಂ ॥
ಪರಕಾಲಂ ಗೀತಲೋಲಂ ಕಮಲಭವಶಿರಪ್ಯಾಲನಾದಾರ್ಯಶೀಲಂ ।
ಕರುಣಾಂಗಂ ವೀತಸಂಗಂ ಮನಸಿಜಮದಭಂಗಂ ವಿರೂಪಾಕ್ಷಲಿಂಗಂ ॥೭೯

ಎನಗಾಳ್ದಂ ತಾನೆ ನೀಳ್ದಂ ಕರಿಪತಿತನುವಂ ಸೀಳ್ದುನಿಂತೊಪ್ಪೆ ಬಾಳ್ದಂ ।
ಘನಗಾಢಂ ವೇದಗೂಢಂ ಸಕಲಗುಣಗಣಪ್ರೌಢನತ್ಯಂತರೂಢಂ ॥
ಮೃಣನದೀಶಂ ಚಿತ್ಪ್ರಕಾಶಂ ಶರಣಜನಸದಾತೋಷನಾನಂದಕೋಶಂ ।
ಮುನಿಸಂಗಂ ಸತ್ಯಶೃಂಗಂ ಕರುಣರಸತರಂಗಂ ವಿರೂಪಾಕ್ಷಲಿಂಗಂ ॥ ೮೦

ಪೋಗದೆಂ ಮಿಕ್ಕಿನ ಚಕ್ರಪಾಣಿಸರಸೀಜೋದ್ಭೂತಸಂಕ್ರಂದನಾ ।
ದಿಗಳಂ ತಾನೆನೆ ಮತ್ತ್ಯಕೀಟಕರ ಪಾತಂತ್ರಿಕರ್ ಮತ್ತಾವನಂ ॥
ಪೊಗಳ್ವೈಯೆಂಬಿಸಿತೇ ಪರಂಗೆ ಶಶಿಭೂಷಂಗೀಶ್ವರಂಗೆಯ್ದೆ ನಾ ।
ಲಗೆಯಂ ಮಾಡಿದೆನೊಲ್ದು ಪಂಪೆಯ ವಿರೂಪಾಕ್ಷಂಗದೇನೆಂಬಪೆಂ ॥ ೮೧

ಮನುಜರ ಮೇಲೆ ಸಾವವರ ಮೇಲೆ ಕನಿಷ್ಠರ ಮೇಲೆ ಪದ್ಯಮಂ ।
ತನತನಗಿಂದ್ರಚಂದ್ರರವಿಕರ್ಣದಧೀಚಿಬಲೀಂದ್ರನೆಂಬು ತಾ ॥
ನನವರತಂ ಪೊಗಟ್ದು ಕಡಬೇಡಲ ಮಾನವ ಸೀಸಪರ್ಶಿಶಂ ।
ನೆನೆ ಪೊಗಟಿರ್ಚಿಸೆನ್ನ ಕಡುಸೊಂಪಿನ ಪೆಂಪಿನ ಪಂಪೆಯಾಳ್ದನಂ ॥ ೮೨

ಎಡಹಿದೊಡಿಲ್ಲ ನಿದ್ರೆ ನಿಡಿದಾದೊಡಮಿಲ್ಲುಸಿರಿಕ್ಕುತಿರ್ದಸಿರ್ ।
ತಡೆದೊಡಮಿಲ್ಲ ಬಿಕ್ಕು ಬಿಡದೊತ್ತಿದೊಡಂ ತಲಿಸಂದೊಡಿಲ್ಲ ಸೀಂ ॥
ತೊಡ ಸಡೆಯಿಲ್ಲ ಕಮ್ಮಿದೊಡಮಿಲ್ಲವಿಸಿಂತಿರದಿಂತು ಕೆಟ್ಟು ಪೋ ।
ಪುಡಲಿದಕೇಕೆ ಕಾಮವಿದಕೇಕೆ ಮದೋನ್ನತಿ ಪಂಪೆಯಾಳ್ದನೇ ॥ ೮೩

ಜನಿಯಿಸುತಿರ್ಪ ಕೋಟಿಜನನಂಗಳೊಳುತ್ತಮಮರ್ತ್ಯಪೂರ್ವಮೀ ।
ಮನುಜಭವಂ ವಿಚಾರಿಸ್ಪೊಡಿದಂ ಪಡೆದುಂ ಮರುಳಾಗಿ ಸತ್ಕೃತೀ ॥
ಜನನಮಿದೆಂತು ಬರ್ಪುದು ವೃಥಾ ಕಳೆದಿರ್ ಕಳೆವಿರ್ ನಿರಂತರಂ ।
ನಿನಗೆ ಹಿತೋಪದೇಶಮಿದು ಮಾನವ ಪೂಜಿಸು ಪಂಪೆಯಾಳ್ದನಂ ॥ ೮೪

ತನ್ನಯ ಕಾಮಮಂ ಸುಡದೆ ತನ್ನಯ ಕೋಪಮುಮಂ ತೆರಳ್ಚದೀ ।
ತನ್ನಯ ಲೋಭಮೋಹಮನೆ ತನ್ನ ಮದೋದ್ಧತಿ ಮತ್ಸರಾದಿಯಂ ॥
ತನ್ನೊಳೆ ತಾನೆ ಸಂತವಿಡಲೊಲ್ಲದೆಯನ್ಯರನಿಂತು ಮಾನು ।
ತ್ತುಂ ನೆರೆ ಪೇಳ್ದು ಬುದ್ಧಿಗಲಿಸಲ್ ತರಪಲ್ಲಿತು ಪಂಪೆಯಾಳ್ದನೇ ॥ ೮೫

ಪೆಂಡತಿ ಬಾರಳರ್ಥವದು ಬಾರದು ಪುತ್ರರೆ ಬಾರರಿಷ್ಟರುಂ ।
ಕಂಡ ಸಖೀಜನಂ ಜನನಿಯುಂ ಬರರಾ ನೆರೆ ಬಾರದಕ್ಕಟಾ! ॥
ತಂಡದ ಪಾಪಪುಣ್ಯವಿವೆ ಬರ್ಪುವಿವರ್ಕೆ ಮಹೇಶನಂ ನತಾ ।
ಖಂಡಲವಂದ್ಯನಂ ಬಿಡದೆ ಪೂಜಿಸು ಮಾನವ ಪಂಪೆಯಾಳ್ದನಂ ॥ ೮೬

ನರರಂ ಸೇವಿಪ ಜೀಯಜೀಯೆನುತುಮಿರ್ಪೆನೆಂದೊಡಂ ದೈನ್ಯಮು ।
ಬ್ಬರಿಸುತ್ತುಂ ತನುಗುಂದಿಯುಂ ತನಗೆ ತಾನೆಂತಕ್ಕೆಯುಂ ಬೇಡುತಿ ॥
ರ್ಪರವಂ ಸುಟ್ಟು ಬಿಸುಟ್ಟು ಭಕ್ತಿಯೊಳಗೋಲಾಡಲ್ ಮನಂಮಾಡು ಶಂ ।
ಕರನಂ ಶಾಶ್ವತನಂ ಕೃಪಾಜಲಧಿಯಂ ಕಂಡೆಂ ವಿರೂಪಾಕ್ಷನಂ ॥ ೮೭

ಪೋಗೆನೆ ಪೋಪ ಬಾರಲಪ್ಪೆ ಬಾರೆನೆ ಜೀಯ ಪಸಾಯವೆಂದು ಬೆ ।
ಳ್ಳಗುತೆ ಬರ್ಪ ಮಾನಲಪ್ಪೊ ಸುಮ್ಮನಿರೆಂದೊಡೆ ಸುಮ್ಮನಿರ್ಪ ಮ ॥
ತ್ತಾಗಳೆ ಬಗ್ಗಿಸಲ್ ನಡುಗಿ ಬೀಳುವ ಸೇವಿಪ ಕಷ್ಟವೃತ್ತಿಯುಂ ।
ಸೀಗಿದೆನಿಂದು ನಿಮ್ಮ ದಯೆಯಿಂ ಕರುಣಾಕರ ಪಂಪೆಯಾಳ್ದನೇ ॥ ೮೮

ಎಲೆಲೆಲೆ ಪುಷ್ಟಿಕಿಟ್ಟನಜಿಯಾ ಕಾಮಕ್ರೋಧವನೂರ್ಧ್ವವಕ್ತ್ರಸಂ ।
ತಲೆಕೆಳಗಾಗಲೆತ್ತಿಬ್ಬಿಸಂದಜಿಯಾ ನಲವಿಂ ಮುಕುಂದನ ॥
ಗ್ಗಲಿಸುವ ದೇಹಮಂ ತೊವಲಸುಬಿರ್ದನೆಂದಜಿಯಾ ಗಜಾಸುರಾ ।
ಕಲಿತಶರೀರಮಂ ಬಿಡು ಘಡಾರ್ಪವಸಾನಸೊ ಪಂಪೆಯಾಳ್ದನೊಳ್ ॥ ೮೯

ಮನುಜರ್ ಗಾವಿಲರೇನನೆಂಬೆನಖಿಳಸಂಗಾತರ್ಂಗೆ ದಂಭಂಗೆ ದು ।
ರ್ಜನಶೀಲಂಗೆ ಶಿವದ್ರೋಹಜೀವನವ್ಯಥಾಲಾಪಂಗೆ ಚಿಃ! ಕಾಕಭೋಃ ॥
ಜನಮುಂ ಮಾಡುವರಲ್ಲದಕ್ಕೆ ಶಿವಭಕ್ತಂಗೀಶಯುಕ್ತಂಗೆ ಲಾಂ ।
ಛನಗುಪ್ತಂಗಱಿದೀಪರುಂಟೆ ಧರೆಯೊಳ್ ಪಂಪಾವಿರೂಪಾಕ್ಷನೇ ॥ ೯

ಶಿವಶಿವ ಪುಣ್ಯಬಂಧುವೆ ಪುರಾತನಬಂಧುವೆ ಸರ್ವಜೀವಬಂ ।
ಧುವೆ ಪರಮಾರ್ಥಬಂಧುವೆ ಸುಖಪ್ರದಬಂಧುವೆ ಬಾರನಾಥಬಂ ॥
ಧುವೆಯನಿಮಿತ್ತಬಂಧುವೆ ಮನೋಹರಬಂಧುವೆ ಅತ್ಯಪೂರ್ವಬಂ ।
ಧುವೆ ಸಕಲೈಕಬಂಧುವೆಅನಾರತಬಂಧುವೆ ಪಂಪೆಯಾಳ್ದನೇ ॥ ೯೧

ಎರಡುಂಟೆಂದೆನುತಿರ್ಪರ್ ಪಾತಕರ ಮಾತಂ ಮಿಾಱುವೆಂ ಮಿಾಱುವೆಂ ।
ಹರನೊರ್ವಂ ಗುರುವೆಂಬ ಡಂಗುರಮುಮಂ ನಾಂ ಸಾಱುವೆಂ ಸಾಱುವೆಂ ॥
ಪರಮಾದಿಪ್ರಕರಕ್ಕೆ ತಳ್ತೆ ವಿರೂಪಾಕ್ಷಪ್ರಸಾದತ್ವದಿಂ ।
ಪರದೃಷ್ಟಾಂತಮನೀಗಳೀಗಳೊಲವಿಂದಂ ತೋಱುವೆಂ ತೋಱುವೆಂ ॥ ೯೨

ಜಗದೊಳಗೆಲ್ಲ ನೋಡುವೊಡೆ ಸತ್ಯಮೆ ತೀವಿ ತುಳುಂಕುತಿರ್ಪುದೈ ।
ಬಗೆವೊಡೆ ಭಕ್ತನೊರ್ವನವನೊಳ್ ನೆರೆ ಸತ್ಯಮನಾಥಬಾತನೇ ॥
ಹಗೆಯನಿಸಿರ್ಪುದೇಕೆಲ ಅಸತ್ಯಮೆ ತಾಂ ಪಿರಿದಾಗೆಯುಂತವಂ ।
ಬಗೆಯದೆ ಸತ್ಯಮಂ ನುಡಿಯುತಚರ್ಸುತಿರ್ಪುದು ಪಂಪೆಯಾಳ್ದನಂ ॥ ೯೩

ಹರಿಯುಂ ಕೃಷ್ಣಾವತಾರಾಂತ್ಯದೊಳಗೆ ಶಬರಂ ಕಾಲನೆಚ್ಚಲ್ಲಿ ಪೋಗಲ್ ।
ಹರಣಂ ಕೊಂಡಾಡುತಿರ್ಪರ್ ಶಬರರವನನುಂ ವಿಷ್ಣುದೇವಂಗಳೆಂ ತಂ ॥
ಕರನುಟ್ಟಂ ತೊಟ್ಟನೆಂದೀಶರಣರೆನೆ ಕರಂ ಸತ್ಯವೆಂಬುವಿವೇಕಂ ।
ಪರಮಾಣಂ ಪುಟ್ಟದೀಶಾಪಮತರ ನುಡಿಯೋಮಾತ್ತೆ ಪಂಪಾಧಿನಾಥಾ ॥ ೯೪

ಹರಿನಯನಾರ್ಚಿತಾಂಘ್ರಿಯುಗಳಂ ಹರಿವೇಷನೀಶಯುಭೂಷಣಂ ।
ಹರಿಹರನೆಂದು ನಿನ್ನ ನಿಜಕೀರ್ತನೆಯಂ ಶರಣಾಳಿ ಕೂಡೆ ಡಂ ॥
ಗುರಿಸುತೆ ಸತ್ಯಮಂ ನುಡಿಯೆ ಸೇರದ ಪಾಪಮತರ್ಗೆ ನಿಂದೆಯಂ ।
ತಿರೆ ಸಲುತಿರ್ಪವೆಂತಿವರ ಪಾಪಮನಿಟ್ಟರಿ ಹಂಪೆಯಾಳ್ದನೇ ॥ ೯೫

ಪ್ರಸಿಯಂ ಪೇಳ್ವುದೆ ನಿಂದೆ ಸತ್ಯಮೆ ಕರಂ ಸ್ತೋತ್ರಂ ಪರಂಗೆಯ್ದುದುಂ।
ಪ್ರಸಿಯಲ್ಲಂತವಱಿಂದೆ ವಿಷ್ಣುನಯನಾಂಭೋಜಾರ್ಚಿತಂ ವಿಷ್ಣುವಾ ॥
ಸನನಾವಿಷ್ಣು ಶರೀರಶೂಲಧರನಾ ವಿಷ್ಣುಪ್ರಿಯಂ ಭೂಪ್ರ! ವಿ।
ಷ್ಣುಶಿರೋವೇಷ್ಟನನಿಂತು ಸಂಸ್ತುತಿಯಿಪೆಂ ಪಂಪಾವಿರೂಪಾಕ್ಷನಂ ॥ ೯೬

ಕೇಳೆಲೆ ವೈಷ್ಣವಾ ನೆಗಟ್ಟಿ* ನಿನ್ನ ನೃಸಿಂಹನನಂದು ಕಾಣುತುಂ।
ಕಾಳಗವಲ್ಲಿಯುಪ್ಪು ಶರಭಂ ನುತಿವೇನವನಗ್ಗಟಾ! ನಿರೋ ॥
ಧಾಳಿಯನಿನ್ನವೊಂಪನುರೆ ಪೋಜ್ವನು ದಕ್ಷನ ಯಾಗದಲ್ಲಿ ಚಿಃ! ।
ಪೇಱಿಂದೇಕೆ ದೇವನಱುಗಂ ನಿರುಗೊತ್ತಿದ ಭಂಗವೆಲ್ಲವುಂ ॥ ೯೭

ಸಡಿ ಘಡ ಮಾನವರ್ ಕುಡುಪರೆಂಬುದನಾಡದಿರೆನ್ನ ಮುಂದೆ ಈ।
ಸ್ಪಡದ ಶರೀರಿಗಳ್ ತೃಣದ ಪಾಪೆಗಳಕ್ಕಟ! ಮಣ್ಣ ಬೊಂಬೆಗಳ್ ॥
ಕುಡುವುವೆ ಬೇಡು ಬೇಡಿದುದನೀವ ಮಹಾಸಿದ್ಧಿಯಂ ಮಹೇಶನಂ।
ನ್ಪೃಡನನನೂನದಾನಿಯನನಂಪಿನ ಸೊಂಪಿನ ಪಂಪೆಯಾಳ್ದನಂ ॥

ಎಱಗುವೆನೆನ್ನ ಪಂಪೆಯರಸಂಗೆ ಪರಂಗೆ ಶಿವಂಗೆ ಮಿಕ್ಕಿನ !
ಗೆಱಗುವ್ರೆಪುಂಟೆ ಪಂಚಮುಖಮುಂಟೆ ಗಜಾಜಿನಮುಂಟೆ ಪತ್ತು ತೋಳ್ ॥
ಕಱೆಗೊರಲುಂಟೆ ಕೆಂಜಡೆಗಳುಂಟೆ ಪುರುನ್ನದಿಯುಂಟೆ ಭಾಗದೊಳ್ ।
ಮಿಱುಗುವ ನೇತ್ರಮುಂಟೆ ಶಶಿಯುಂಟೆ ವೃಷಧ್ವಜಮುಂಟೆ ದೇವರೊಳ್ ॥

ಜಯಜಯ ಪುಣ್ಯಮಾರ್ಗಮಿದು ಸಾತ್ವಿಕಲಕ್ಷಣಮಿಂತಿದಾವ್ಯರ।
ಸ್ವಯಮಿದನೂನಭಕ್ತಿರಸಪೂರಮಿದುತ್ತಮಶೀಲಭಕ್ತರಾ ॥
ಶ್ರಯಮಿದು ತಪ್ಪದೆಂದು ಶರಣರ್ ಮಿಗೆ ಬಣ್ಣಿಸೆ ಪೇಳ್ದನಾದ! ಪಂ।
ಪೆಯ ಹರಿದೇವನೀಶತಕಮಂ ಸಕಲೇಷ್ಟಫಲಪ್ರದಾತೃವಂ ॥ ೧೦೦

ಹಂಪೆಯ ಹರಿದೇವರಿಂ

ವಿರಚಿತವಾದ

# ಪಂಪಾಶತಕಂ.

ಸಂಪೂರ್ಣಂ.

—:0:—

# KARNATAKA KAVYA-KALANIDHI

A monthly journal intended for the publication
of
**RARE and EXCELLENT KANNADA WORKS.**

Each number contains 40 pages and the paging is so arranged that on the completion of each work it may be bound as a separate volume. The Editors appeal to the sympathy of the Public. The work is costly but it will preserve literary treasures that otherwise are likely to be lost.

All who are interested in the ancient literature of their country should subscribe.

**Terms of Subscription.**

| | |
|---|---|
| Yearly Subscription | Rs. 3-0-0 |
| Single copy to subscribers only | 0-6-0 |

Postage Extra.

All subscriptions must be paid in advance.

Address—

The Editors, Karnataka Kavya Kalanidhi, Mysore.

## ಕರ್ಣಾಟಕ ಕಾವ್ಯಕಲಾನಿಧಿ.

ಈ ಮಾಸ ಪುಸ್ತಕವು ಪ್ರತಿ ತಿಂಗಳೂ ಪ್ರಕಟವಾಗುತ್ತದೆ. ಇದರಲ್ಲಿ ಪ್ರಾಚೀನ ಕವಿಗಳ ಉತ್ತಮವಾದ ಕಾವ್ಯ ನಾಟಕ ಚಂಪು ಗದ್ಯ ಛಂದಸ್ಸು ಅಲಂಕಾರ ಮುಂತಾದ ಗ್ರಂಥಗಳು ಮುದ್ರಿಸಲ್ಪಡುತ್ತವೆ. ಇದರಲ್ಲಿ ಅಚ್ಚಾಗುವ ಗ್ರಂಥಗಳಿಗೆ ಬೇರೆಬೇರೆ ಪುಟಸಂಖ್ಯೆಯನ್ನು ಕೊಡುವುದರಿಂದ ಗ್ರಂಥವು ಮುಗಿದಕೂಡಲೆ ಬೇರೆಬೇರೆ ಪುಸ್ತಕಗಳಾಗಿ ರಟ್ಟುಕಟ್ಟಿಸಬಹುದು. ಇದರ ಪ್ರತಿಸಂಚಿಕೆಯೂ ೪೦ ಪುಟಗಳಿಗೆ ಕಡಮೆಯಿಲ್ಲದೆ ಇರುತ್ತದೆ.

ಭಾಷಾಭಿಮಾನಿಗಳೆಲ್ಲರೂ ಇದಕ್ಕೆ ಪ್ರೋತ್ಸಾಹ ಮಾಡುತ್ತಾರೆಂದು ನಂಬುತ್ತೇವೆ.

**ಚಂದಾ ನಿರ್ಣಯ.**

| | |
|---|---|
| ವರ್ಷವೊಂದಕ್ಕೆ ಹಾಸಲು ಇಲ್ಲದೆ | ೩—೦—೦ |
| ಚಂದಾದಾರರಿಗೆ ಮಾತ್ರ ಬಿಡಿಪ್ರತಿ ಒಂದಕ್ಕೆ | ೦—೬—೦ |

ಮುಂಗಡವಾಗಿ ಹಣವನ್ನು ಕಳುಹಿದ ಹೊರತು ಸಂಚಿಕೆಗಳು ಕಳುಹಲ್ಪಡುವದಿಲ್ಲ.